ಎಂ.ಡಿ. ಶ್ರೀನಿವಾಸ

# ಮಧುಗಿರಿ ಇತಿಹಾಸದಲ್ಲಿ ಶಿವ ಶರಣೆಯರು

ಕನಕ – ಪುರಂದರು ತಮ್ಮ ಗೀತಾರಾಧನೆಯ ಮೂಲಕ ಭಗವಂತನ ಸಾಮಿಪ್ಯ ಸಾಧಿಸಿಲು ಯತ್ನಸಿಸಿದರೆ,ಬಸವಣ್ಣ – ಅಲ್ಲಮರು ಕಾಯಕದ ಮೂಲಕ ಕೈಲಾಸಕ್ಕೆ ಪ್ರಯತ್ನಿಸಿ ಉಳಿದವರಿಗೆ ಮಾರ್ಗದರ್ಶಿಗಳಾದರು. ಇದೇ ಹಾದಿ ತುಳಿದ ಕೆಲವರೆಂದರೆ ಮಧುಗಿರಿಯ ಬಿಜ್ಜವರ ಶಿವಶರಣೆ ಅಮ್ಮವ್ವೆ, ಗುರು ನಂಜಮ್ಮ, ಗುರಮ್ಮ, ಜಿರಲೆ ಮಲ್ಲಮ್ಮ, ಮುಂತಾದವರು. ಇವರೆಲ್ಲರ ಪರಿಚಯದ ಕಿರುಚಿತ್ರ.

## ಅಮ್ಮವ್ವೆ

ಮಧುಗಿರಿಯ ವಿಸ್ತರಣದಂತಿರುವ ಬಿಜ್ಜವರದಲ್ಲಿದ್ದ ಶಂಕರ ಮತ್ತು ಭಾಗೀರಥಿ ಎಂಬ ಶಿವಭಕ್ತರ ಕುವರಿ ಅಮ್ಮವ್ವೆ. ಸಹಜವಾಗಿಯೇ ಈ ಮಗುವೂ ಶಿವಭಕ್ತಳಾಗಿ ಬೆಳೆಯಿತು. ಕುಬ್ಜೆಯಾದ ಇವಳಿಗೆ ಪ್ರಾಪ್ತ ವಯಸ್ಸಿನಲ್ಲಿ ವಿವಾಹ ಮಾಡಲೆತ್ನಿಸಿದ ತಂದೆ-ತಾಯಿಗಳು ಈಗಿನ ಸಿದ್ದಾಪುರ ಗಿದ್ದೇನಹಳ್ಳಿಯ ಮಧ್ಯೆ ವಾಸಿಸುತ್ತಿದ್ದ ವೀರಶೈವ ಮನೆತನದ ಅಮ್ಮವ್ವೆಯ ಸೋದರತ್ತೆಯ ಮಗ ಬಾಳಯ್ಯನಿಗೆ ಕೊಟ್ಟು ವಿವಾಹ ಪೂರೈಸಿದರು. ದುರ್ದೈವದಿಂದ ವಿವಾಹ ವಿಧಿ ಮುಗಿದ ತಿಂಗಳೊಳಗೆ ಪತಿ ವಿಧಿ ವಶನಾದ, ಇದರ ಹಿಂದೆ ತಾಯಿ-ತಂದೆಯರು. ಇನ್ನೇನು ಪ್ರಪಂಚವೇ ಶೂನ್ಯ ಎಂಬಂತಾದಾಗ ಕೈಹಿಡಿದು ನಡೆಸಿದ್ದು ಅಮ್ಮವ್ವೆ ಯಲ್ಲಿದ್ದ ಶಿವಭಕ್ತಿ. ಅಲ್ಲಿನ ಶಿವ ದೇವಾಲಯಗಳಲ್ಲಿ ಶಿವ ಪುರಾಣ ಕೇಳಲು ಹೋಗತೊಡಗಿದಳು. ಪುರಾಣಕಾರರು ಶಿವನ ಕಷ್ಟಗಳನ್ನು ಮನ ಕರಗುವಂತೆ ವರ್ಣಿಸುತ್ತಿದ್ದರೆ ಮುಗ್ಧೆ ಅಮ್ಮವ್ವೆ ಇದನ್ನು ಕೇಳಿ ಶಿವನನ್ನು ಮಗುವಿನಂತೆ ಕಾಪಾಡಬೇಕು ಎಂದು ಬಯಸುತ್ತಿದ್ದಳು. ಒಂದು ರಾತ್ರಿ ಶಿವನು ಸ್ವಪ್ನದಲ್ಲಿ ಬಂದು "ಅಮ್ಮವ್ವೆ ನಿನ್ನ ನಿಷ್ಕಲ್ಮಶ ಭಕ್ತಿಗೆ ಮೆಚ್ಚಿರುವೆ ನಿನಗೆ ಮಗುವಾಗಿನಾನು ದೊರೆಯುವೆ" ಎಂದಂತಾಯಿತು. ಹಾಗೆಯೇ ಆ ಸ್ವಪ್ನ ಸೂಚನೆಯನುಗುಣವಾಗಿ ಈಗಿನ ಸಿದ್ದಾಪುರ ಮತ್ತು ಬಸವನ ಹಳ್ಳಿಯ ಮಧ್ಯೆ ಇದ್ದ ಹಳ್ಳದ ಪಕ್ಕದ ಕಾಡಿನಲ್ಲಿ ಅವಳ ಪೂರ್ವಜನ್ಮದ ಪುಣ್ಯದ ಸಾಕಾರ ರೂಪವಾಗಿ ಆ ಮಗು ಸಿಕ್ಕಿತು. ಅದನ್ನು ಸಂಭ್ರಮದಿಂದ ಮನೆಗೆ ತಂದು 'ನಾಗೇಶ' ಎಂಬ ಹೆಸರಿಟ್ಟು ಅಕ್ಕರೆಯಿಂದ ಲಾಲಿಸಿದಳು. ದಿನ ಕಳೆದಂತೆ ನಾಗೇಶ ಪೂರ್ಣಿಮೆಯ ಚಂದ್ರನಂತೆ ವೃದ್ಧಿಸುತ್ತಿದ್ದಾಗಲೇ ವ್ಯಾಧಿಗ್ರಸ್ತನಾದ. ವೈದ್ಯರೂ ಕೈ ಚೆಲ್ಲಿದರು. ಹತಾಶಳಾದ ಅಮ್ಮವ್ವೆ ಶಿವನಿಗೆ ಶಿರವನ್ನೇ ತಂದು ಅರ್ಪಿಸಲಣಿಯಾದಾಗ ಶಿವ ಪ್ರತ್ಯಕ್ಷನಾದ. ಗುರುವಿನ ಅಣತಿ ಇಲ್ಲದೆ ಶಿವನೊಡನೆ ಕೈಲಾಸಕ್ಕೆ ಬರಲು ಒಪ್ಪದ ಅಮ್ಮವ್ವೆ ಕೆಲವು ಕಾಲದ ನಂತರ ಇಷ್ಟಲಿಂಗದ ಮೂಲಕ ಶಿವಸಾನ್ನಿಧ್ಯ ಪಡೆದಳು. ಹೀಗೆ ಶಿವಭಕ್ತಳಾದ ಓರ್ವ ಸಾಧ್ವಿಯ ಜೀವನ ಮುಗಿಯಿತು.

ಅಮ್ಮವ್ವೆ ಶಿವನನ್ನು ಪ್ರತ್ಯಕ್ಷ ಮಾಡಿಕೊಂಡಳೆಂದು ಹೇಳಲಾದ ಸ್ಥಳ ಸಿದ್ದಾಪುರ ಮತ್ತು ಬಸವನ ಹಳ್ಳಿಯ ಮಧ್ಯೆ ಇದೆ ಎಂದು ನಂಬುತ್ತಾರೆ. ಶಿವನು ಮಗುವಾಗಿ ಸಿಕ್ಕಿದ್ದನೆನ್ನಲಾದ ಸ್ಥಳದಲ್ಲಿ ಅಮ್ಮವ್ವೆಪೂಜಿಸುತ್ತಿದ್ದ ಲಿಂಗವಿದೆ. ಇದಕ್ಕೆ ಇಮ್ಮಡಿ ಚಿಕ್ಕಪ್ಪ ಗೌಡರು ಪುರವರದ ನೊಣಬೇಶ್ವರ ದೇವಾಲಯದ ಮಾದರಿಯಲ್ಲಿ ಕಟ್ಟಿಸಿದ ದೇವಾಲಯವಿದೆ. ಎದುರಿಗೆ ಅಮ್ಮವ್ವೆಯ ವಿಗ್ರಹವಿದೆ. ಇಲ್ಲಿ ಹರಿಯುವ ಹಳ್ಳ " ಅಮ್ಮವ್ವೆ ಹಳ್ಳ " ಎಂದೇ ಹೆಸರಾಗಿದೆ.

## ಗುರಮ್ಮ

ಮಧುಗಿರಿಯ ಪುಣ್ಯಕ್ಷೇತ್ರಗಳಲ್ಲಿ ಗುರಮ್ಮನ ಮಠ ಒಂದು. ಮಧುಗಿರಿಯ ಮಹಾ ಪ್ರಭುಗಳಲ್ಲಿ ಸೈನ್ಯಾಧಿಕಾರಿ ಆಗಿದ್ದ ಗುರಪ್ಪ ಮತ್ತು ಆತನ ಮಡದಿ ಪಟಾಲದಮ್ಮನಿಗೆ ಗುರು ಸಿದ್ದೇಶ್ವರರ ಆಶೀರ್ವಾದದಿಂದ ಗುರಮ್ಮ ಎಂಬ ಮಗಳು ಜನಿಸಿದಳು. ಅವಳಿಗೆ ಏಳು ವರ್ಷ ಕಳೆದಾಗ ಶತ್ರುಗಳು ಅವಳ ತಂದೆಯನ್ನು ಯುದ್ಧದಲ್ಲಿ ಕೊಂದು ಹಾಕಿದರು. ಮುಂದೆ ಗುರಮ್ಮನು ಗುರುವಿನ ಅಣತಿಯಂತೆ ತಮ್ಮಲ್ಲಿದ್ದ ಹಣವನ್ನೆಲ್ಲಾ ಸತ್ಕಾರ್ಯಕ್ಕೆ ಬಳಸುತ್ತಾ, ಶಿವಧ್ಯಾನ ಮಾಡುತ್ತಾ, ಮಧುಗಿರಿ ಬೆಟ್ಟದ ಬಳಿಯಲ್ಲಿ ವಾಸಿಸಿದಳು. ಜೀವನದಲ್ಲಿ ಮದುವೆಯ ಯೋಗವನ್ನು ತೊಡೆದು ಹಾಕಿ ಶಿವನಲ್ಲಿ ಭಕ್ತಿಯನ್ನಿಟ್ಟು ಬದುಕಲು ಗುರಮ್ಮನು ನಿಶ್ಚಯಿಸಿದಳು. ಒಂದು ಗೋವಿನ ಕಟ್ಟೆಯನ್ನು ಕಟ್ಟಿಸಿದಳು. ಒಂದು ಮಠವನ್ನು ಸಹ

ನಿರ್ಮಿಸಿ ಶಿವಲಿಂಗವನ್ನು ಪ್ರತಿಷ್ಠಾಪಿಸಿದಳು. ಕಾಲ ಚಕ್ರ ಉರುಳಿದಂತೆ ಗುರಮ್ಮನು ಒಂದು ದಿನ ಶಿವ ಪಾದವನ್ನು ಸೇರಿದಳು. ಇಂದು ಸಹ ಮಠವು ಶಿಥಿಲವಾಗದೆ ಉಳಿದಿದೆ.

## ಗುರು ನಂಜಮ್ಮ

ಮಧುಗಿರಿ ತಾಲ್ಲೂಕಿಗೆ ಸೇರಿದ ಪೂಜಾರ್ ಹಳ್ಳಿಯಲ್ಲಿ, ಶಿವಭಕ್ತರಾದ ದಂಪತಿಗಳಿದ್ದರು. ಶ್ರೀ ನಂಜುಂಡೇಶ್ವರನ ಕೃಪೆಯಿಂದ ಒಂದು ಹೆಣ್ಣು ಮಗು ಜನನವಾಯಿತು. ಅದಕ್ಕೆ ನಂಜಮ್ಮನೆಂದು ಹೆಸರಿಟ್ಟರು. ಬಾಲ್ಯದಿಂದಲೂ ಈ ತರಳೆ ಶಿವನ ಚಿಂತನೆಯಲ್ಲಿಯೇ ತಲ್ಲೀನಳಾಗಿರುತ್ತಿದ್ದಳು. ಮದುವೆಯ ಬಂಧನಕ್ಕೆ ಒಳಪಡದೆ ಮನೆಯನ್ನೇ ತೊರೆದು ಮಧುಗಿರಿ ಬೋಳಿ ಬೆಟ್ಟದ ಬುಡದಲ್ಲಿರುವ ಶ್ರೀ ಸಿದ್ಧೇಶ್ವರ ಸ್ವಾಮಿಗಳ ತಾಣದಲ್ಲಿ ಆಶ್ರಯ ಪಡೆದು ವೈರಾಗ್ಯ ಚಿಂತನೆಯನ್ನು ಇನ್ನಷ್ಟು ಬೆಳೆಸಿಕೊಂಡಳು. ಆಕೆಯ ಜೀವಿತಾವಧಿಯಲ್ಲಿ ಅನೇಕ ಪವಾಡಗಳೇ ನಡೆದವು. ಕಳ್ಳರನ್ನು ಓಡಿಸಿದ್ದು, ವಿವಾಹ ಭೋಜನವನ್ನೆಲ್ಲಾ ಅಗೋಚರವಾಗುವಂತೆ ಮಾಡಿದ್ದು, ಒಂದೇ ದಿನದಲ್ಲಿ ಬಾವಿ ತೋಡಿದ್ದು, ಇಷ್ಟಲ್ಲದೆ ಹರಿಜನೋದ್ಧಾರ ಇವೇ ಮೊದಲಾದ ಮಾನವೀಯ ಕೆಲಗಳನ್ನು ಮಾಡಿ ಮುಗಿಸಿದಳು. ಅಂತ್ಯ ಕಾಲದಲ್ಲಿಶ್ರೀ ಸಿದ್ಧೇಶ್ವರರ ಅಣತಿಯಂತೆ ದಾಸೋಹ ಕಾರ್ಯ ಕೈಗೊಂಡಳು. ಸಿದ್ಧೇಶ್ವರರು ಶಿವ ಸಾಯುಜ್ಯ ಸೇರಿದ ಮೇಲೆ ಅವರ ಸಮಾಧಿಯನ್ನು ಮಧುಗಿರಿಗೆ ಪೂರ್ವಕ್ಕಿರುವ ರಸ್ತೆ ಬದಿಯಲ್ಲಿ ಇರುವ ಸ್ಥಳದಲ್ಲಿಸಮಾಧಿ ಮಾಡಿದ್ದಾರೆ. ಈಕೆಯ ಸಮಾಧಿಯು ಗುರುಗಳ ಸಮಾಧಿ ಪಕ್ಕದಲ್ಲೇ ಇರುವುದು. ನಂಜಮ್ಮನ ಅಭೀಷ್ಟೆಯ ಮೇರೆಗೆ ಬಸವಣ್ಣನವರಂತೆ ಈಕೆಯು ಸಮಾಜ ಸುಧಾರಣೆಗೆ ಪ್ರಯತ್ನ ಪಟ್ಟವಳು. ವಿಶ್ವಮಾನವಳಾಗುವ ಗುಣಗಳನ್ನು ಅಂದೇ ಮೈಗೂಡಿಸಿಕೊಂಡಿದ್ದಳು. ಇಂದು ಸಹ ಗುರು–ಶಿಷ್ಯೆಯರ ಸಮಾಧಿಗಳಿರುವ ಮಠವನ್ನು ಕಾಣಬಹುದು.

## ಜಿರಲೆ ಮಲ್ಲಮ್ಮ

'ಎಲ್ಲರಲ್ಲೂ ಶಿವನಿರುವನು ಯಾರಿಗರ್ಪಿಸಿದರೂ ಶಿವನಿಗೆ ತಲುಪುತ್ತದೆ' ಎಂಬುದೇ ಶಿವಶರಣೆ ಮಲ್ಲಮ್ಮನ ನಂಬಿಕೆ. ಹರಿಹರರಲ್ಲಿ ಭೇದವ ಕಾಣದೆ ಹರಿಯಲ್ಲೂ ಹರನನ್ನೇ ಕಂಡವಳು. ಈಕೆ ಅತ್ಯಂತ ಮುಗ್ಧೆ, ಬೆಣ್ಣೆಯಂತಹ ಮೃದು ಸ್ವಭಾವ. ಬೆಣ್ಣೆ ಮಾತು ಶ್ರೀ ಕೃಷ್ಣನ ದೇವಾಲಯವನ್ನು ಕಟ್ಟಿಸಿದಳು. ಮಕ್ಕಳು ಬೆಣ್ಣೆ ಕೇಳಿದರೆ ಯಾವಾಗಲೂ ಅದಕ್ಕೆ ಜಿರಲೆ ಬಿದ್ದಿದೆ ಎಂದು ಹೇಳಿ ಮಕ್ಕಳಿಗೆ ಹಾಕುತ್ತಿರಲಿಲ್ಲ. ಸದಾ ಹೀಗೆ ಹೇಳುತ್ತಿದ್ದರಿಂದ ಮಲ್ಲಮ್ಮನನ್ನು 'ಜಿರಲೆ ಮಲ್ಲಮ್ಮ' ನೆಂದೇ ಕರೆಯುತ್ತಿದ್ದರು.

ವೀರಶೈವ ಧರ್ಮ ದೀಕ್ಷಕರಾದ ನೊಳಂಬ ರಾಜರು ಬಿಜವರವನ್ನು ರಾಜಧಾನಿಯನ್ನಾಗಿಸಿಕೊಂಡು ಪ್ರೋತ್ಸಾಹಿಸಿದ ಹಿನ್ನೆಲೆಯಲ್ಲಿ ಶಿವಶರಣೆಯರು ಮಾನವೀಯ ಸತ್ಕಾರ್ಯಗಳನ್ನು ಮಾಡಿ ಭಕ್ತಿಯ ಬೀಜವನ್ನು ಬಿತ್ತಲು ಕಾರಣೀ ಭೂತರಾದರು.

ಮಧುಗಿರಿ ಶಿವಶರಣೆಯರ ಬೀಡು. ನೊಳಂಬ ರಾಜರು ಆಳಿದ ಪ್ರಸಿದ್ಧ ಸ್ಥಳ. ವೀರಶೈವ ಸಂತರುಗಳಾದ ಕೋಲು ಶಾಂತಪ್ಪ ಸ್ವಾಮಿ, ಮುರಾಹರಿ ಸ್ವಾಮಿ, ಪುಟ್ಟಪ್ಪಯ್ಯ ಸ್ವಾಮಿ, ಯೋಗಿ ಬಾಳಾರಾದ್ಯರು ಮತ್ತು ಸಿದ್ಧೇಶ್ವರ ಗದ್ದುಗೆಗಳಿರುವ ಪುಣ್ಯಕ್ಷೇತ್ರ ಎಂಬ ಹೆಗ್ಗಳಿಕೆಗೆ ಪಾತ್ರವಾಗಿರುವುದು .ವಿಜಯನಗರದ ಸಾಮ್ರಾಜ್ಯದ ಉದಯದಿಂದ ಕನ್ನಡ ನಾಡಿಗೂ ವೀರಶೈವ ಧರ್ಮಕ್ಕೂ ಅಪಾರ ಪ್ರಯೋಜನವಾಗಿದೆ ಎಂಬುದು ಗಮನಾರ್ಹವಾದ ಸಂಗತಿ.